ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತೊಂದನೆಯ ಅಧಿವೇಶನ

ಸೋಮವಾರ, ದಿನಾಂಕ : 21 ನೇ ಸೆಪ್ಟೆಂಬರ್, 2020

ಕೂಲಿ ಮತ್ತು ಇತರೆ ಕಾರ್ಮಿಕ ಕುಟುಂಬಗಳ ವಲಸೆ ಕುರಿತು

ಶ್ರೀ ಪಿ. ಆರ್. ರಮೇಶ್(ನಾಮನಿರ್ದೇಶನ ಹೊಂದಿದವರು) –

93 (91) ಮಾನ್ಯ ಕಾರ್ಮಿಕ ಮತ್ತು ಸಕ್ಕರೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ –

(ಅ) ಪ್ರಸ್ತುತ ಕೊರೋನ ಮಹಾಮಾರಿ ರೋಗದ ಹಿನ್ನಲೆಯಲ್ಲಿ ರಾಜ್ಯದಲ್ಲಿ ಅದರಲ್ಲೂ ನಗರ ಪ್ರದೇಶಗಳಿಂದ ಹಲವು ಕೂಲಿ

ಮತ್ತು ಇತರೆ ಕಾರ್ಮಿಕ ಕುಟುಂಬಗಳು ತಮ್ಮ ಸ್ವಂತ ಊರುಗಳಿಗೆ, ರಾಜ್ಯಗಳಿಗೆ ವಾಪಸ್ ಹೋಗಿರುವ/ಹೋಗುತ್ತಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಬಂದಿದ್ದಲ್ಲಿ, ಈ ಪ್ರಕ್ರಿಯೆಯನ್ನು ತಡೆಯಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; (ವಿವರ ನೀಡುವುದು)

(ಇ) ವಾಪಸ್ ಹೋಗಿರುವ ಸದರಿ ಕುಟುಂಬಗಳನ್ನು ಮರಳಿ ಬರುವಂತೆ ಮಾಡಲು ಸರ್ಕಾರ ಯಾವುದಾದರೂ ಪೂರಕ ಯೋಜನೆಗಳ ಕುರಿತು ಚಿಂತಿಸಿದೆಯೇ; (ವಿವರ ನೀಡುವುದು)

(ಈ) ಮಹಾಮಾರಿ ಹಿನ್ನಲೆಯಲ್ಲಿ ರಾಜ್ಯದಲ್ಲಿ ಹಲವಾರು ಸಣ್ಣ ಕಾರ್ಖಾನೆಗಳು (Factory) ಬಾಗಿಲು ಮುಚ್ಚಿರುವ ವಿಷಯ ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಎಷ್ಟು ಕಾರ್ಖಾನೆಗಳು ಬಾಗಿಲು ಮುಚ್ಚಿವೆ ಮತ್ತು ಎಷ್ಟು ಸಂಖ್ಯೆಯ ನೌಕರರು ಬೀದಿ ಪಾಲಾಗಿದ್ದಾರೆ; (ಮಾಹಿತಿ ನೀಡುವುದು)

(ಉ) ಈ ಬೀದಿ ಪಾಲಾಗಿರುವ ಕಾರ್ಮಿಕರ ಮತ್ತು ಅವರ ಅವಲಂಭಿತ ಕುಟುಂಬಗಳ ಮುಂದಿನ ಜೀವನೋಪಾಯ ವಿಷಯದ ಬಗ್ಗೆ ಸರ್ಕಾರದ ನಿಲುವೇನು? (ಮಾಹಿತಿ ನೀಡುವುದು)